ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ : 916
2. ಸದಸ್ಯರ ಹೆಸರು : ಡಾ||ತೇಜಸ್ವಿನಿಗೌಡ
3. ಉತ್ತರಿಸುವ ದಿನಾಂಕ : 21.12.2021
4. ಉತ್ತರಿಸುವ ಸಚಿವರು : ಕೈಮಗ್ಗ ಮತ್ತು ಜವಳಿ, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ಸಚಿವರು

<table>
<tr><th>ಕ್ರ.ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>(ಅ)</td><td>ರಾಜ್ಯದಲ್ಲಿರುವ ಕಬ್ಬು ಬೆಳೆ ಪ್ರದೇಶವೆಷ್ಟು; ನೀರಾವರಿ ಹಾಗೂ ಅರೆ-ನೀರಾವರಿ ಪ್ರದೇಶವೆಷ್ಟು;</td><td>ರಾಜ್ಯದಲ್ಲಿ 2020-21ನೇ ಸಾಲಿನಲ್ಲಿ ಅಂದಾಜು 8.85 ಲಕ್ಷ ಹೆಕ್ಟೇರ್ ನೀರಾವರಿ ಪ್ರದೇಶದಲ್ಲಿ ಕಬ್ಬು ಬೆಳೆಯನ್ನು ಬೆಳೆಯಲಾಗಿದೆ.</td></tr>
<tr><td>(ಆ)</td><td>ರಾಜ್ಯದಲ್ಲಿರುವ ಸಕ್ಕರೆ ಕಾರ್ಖಾನೆಗಳು ಎಷ್ಟು; ಸರ್ಕಾರಿ ಹಾಗೂ ಖಾಸಗಿ ಸಕ್ಕರೆ ಕಾರ್ಖಾನೆಗಳು ಎಷ್ಟು; ಸಕ್ಕರೆ ಉದ್ಯಮದಿಂದ ಎಷ್ಟು ಜನರಿಗೆ ಉದ್ಯೋಗಾವಕಾಶ ದೊರಕಿದೆ;</td><td>ರಾಜ್ಯದಲ್ಲಿ ಒಟ್ಟು 88 ನೋಂದಾಯಿತ ಸಕ್ಕರೆ ಕಾರ್ಖಾನೆಗಳಿದ್ದು, ಇವುಗಳ ಪೈಕಿ 65 ಸಕ್ಕರೆ ಕಾರ್ಖಾನೆಗಳು ಕಾರ್ಯನಿರತವಾಗಿವೆ. ವಲಯವಾರು ವಿವರ ಈ ಕೆಳಕಂಡಂತಿದೆ.
<table>
<tr><th>ಕ್ರ.ಸಂ</th><th>ವಲಯ</th><th>ಕಾರ್ಯನಿರತ</th><th>ಸ್ಥಗಿತ</th><th>ಸಮಾಪನೆ</th><th>ಒಟ್ಟು</th></tr>
<tr><td>1</td><td>ಸಾರ್ವಜನಿಕ ವಲಯ</td><td>-</td><td>02</td><td>-</td><td>02</td></tr>
<tr><td>2</td><td>ಜಂಟಿ ವಲಯ</td><td>-</td><td>-</td><td>01</td><td>01</td></tr>
<tr><td>3</td><td>ಸಹಕಾರಿ ವಲಯ</td><td>13</td><td>05</td><td>04</td><td>22</td></tr>
<tr><td>4</td><td>ಸಹಕಾರಿ ವಲಯ (ಗುತ್ತಿಗೆ)</td><td>08</td><td>-</td><td>-</td><td>08</td></tr>
<tr><td>5</td><td>ಖಾಸಗಿ ವಲಯ</td><td>44</td><td>11</td><td>-</td><td>55</td></tr>
<tr><td></td><td>ಒಟ್ಟು</td><td>65</td><td>18</td><td>05</td><td>88</td></tr>
</table>
ರಾಜ್ಯದಲ್ಲಿ ಸಕ್ಕರೆ ಉದ್ಯಮದಿಂದ ಪ್ರತ್ಯಕ್ಷವಾಗಿ ಅಂದಾಜು 58,500 ಜನರಿಗೆ ಮತ್ತು ಪರೋಕ್ಷವಾಗಿ 1,17,000 ಜನರಿಗೆ ಉದ್ಯೋಗಾವಕಾಶ ದೊರಕಿರುತ್ತದೆ.</td></tr>
<tr><td>(ಇ)</td><td>ಸಕ್ಕರೆ ಕಾರ್ಖಾನೆಗಳು ಬಾಕಿ ಉಳಿಸಿಕೊಂಡಿರುವ ವಿದ್ಯುತ್ ಬಿಲ್‌ಗಳ ಮೊತ್ತ ಎಷ್ಟು;</td><td>ರಾಜ್ಯದ ಸಕ್ಕರೆ ಕಾರ್ಖಾನೆಗಳು ಒಟ್ಟು ರೂ. ರೂ: 6241.72 ಲಕ್ಷಗಳ ವಿದ್ಯುತ್ ಬಿಲ್‌ಅನ್ನು ಬಾಕಿ ಉಳಿಸಿಕೊಂಡಿರುತ್ತವೆ.</td></tr>
<tr><td>(ಈ)</td><td>ಸಕ್ಕರೆ ಕಾರ್ಖಾನೆಗಳಿಂದ ಬೆಲ್ಲದಂಶದಿಂದ ಕೂಡಿದ 'ಆರೋಗ್ಯ ಸ್ನೇಹಿ' ಸಕ್ಕರೆ ಉತ್ಪನ್ನ ಮಾಡಲಾಗುತ್ತಿದೆಯೇ; ದೇಶೀಯ ಬೇಡಿಕೆ ಎಷ್ಟಿದೆ; ವಿದೇಶಗಳಿಗಿಂತ ನಮ್ಮ ಸಕ್ಕರೆ ಗುಣಮಟ್ಟ ಉತ್ತಮವಾಗಿದೆಯೇ; ಆಧುನಿಕ ತಂತ್ರಜ್ಞಾನ ಅಳವಡಿಕೆ ಆಗಿದೆಯೆ;</td><td>ರಾಜ್ಯದಲ್ಲಿ ಕಾರ್ಯನಿರ್ವಹಿಸುತ್ತಿರುವ ಸಕ್ಕರೆ ಕಾರ್ಖಾನೆಗಳು ಸಕ್ಕರೆಯನ್ನು ಮಾತ್ರ ಉತ್ಪಾದನೆ ಮಾಡುತ್ತಿವೆ. ಆದರೆ ಕೆಲವು ಸಕ್ಕರೆ ಕಾರ್ಖಾನೆಗಳು ರೀಫೈನ್ಡ್ ಸಕ್ಕರೆಯನ್ನು ಉತ್ಪಾದನೆ ಮಾಡಲು ಆಧುನಿಕ ತಂತ್ರಜ್ಞಾನವನ್ನು ಬಳಕೆ ಮಾಡಿಕೊಳ್ಳುತ್ತವೆ. ಇಂತಹ ಸಕ್ಕರೆಯು ಉತ್ತಮ ಗುಣಮಟ್ಟದ್ದಾಗಿದ್ದು, ಅಂತಾರಾಷ್ಟ್ರೀಯ ಮಟ್ಟದಲ್ಲಿ ಬೇಡಿಕೆ ಇರುತ್ತದೆ.<br>ಸಲ್ಫಿಟೇಶನ್ ಪ್ರಕ್ರಿಯೆಯನ್ನು ಉಪಯೋಗಿಸಿ ಸಕ್ಕರೆಯನ್ನು ಉತ್ಪಾದಿಸುವುದರಿಂದ ಗಂಧಕದ ಅಂಶ ಸಕ್ಕರೆಯಲ್ಲಿ ಇರುತ್ತದೆ. ಆದ್ದರಿಂದ ಇಂತಹ ಸಕ್ಕರೆಗೆ ಅಂತಾರಾಷ್ಟ್ರೀಯ ಮಟ್ಟದಲ್ಲಿ ಹೆಚ್ಚಿನ ಬೇಡಿಕೆ ಇರುವುದಿಲ್ಲ. ಕರ್ನಾಟಕವು ರಾಷ್ಟ್ರದ ಮೂರನೇ ಅತಿದೊಡ್ಡ ಸಕ್ಕರೆ ಉತ್ಪಾದನೆಯ ರಾಜ್ಯವಾಗಿದ್ದು, ದೇಶದ ಒಟ್ಟು ಸಕ್ಕರೆ ಉತ್ಪಾದನೆಯ ಶೇ.16 ರಷ್ಟನ್ನು ಉತ್ಪಾದಿಸುತ್ತಿದೆ. ಸಕ್ಕರೆಯ ದೇಶೀಯ ಬೇಡಿಕೆಯು ಭಾರತ ದೇಶದಲ್ಲಿ ಪ್ರಸ್ತುತ 32-33 ಮಿಲಿಯನ್‌ಗಳಾಗಿದ್ದು, ರಾಜ್ಯದ ಬೇಡಿಕೆಯು 15 ಲಕ್ಷ ಟನ್‌ಗಳಾಗಿರುತ್ತದೆ.</td></tr>
<tr><td>(ಉ)</td><td>ರಾಜ್ಯದ ಕಬ್ಬು ಬೆಳೆಗಾರರಿಗೆ ನೀಡಬೇಕಾದ ಬಾಕಿಯನ್ನು ಸಕ್ಕರೆ ಕಾರ್ಖಾನೆಗಳು ನೀಡಿವೆಯೇ; ಇಲ್ಲವಾದಲ್ಲಿ, ಯಾವ ಕ್ರಮವಹಿಸಲಾಗಿದೆ;</td><td>ರಾಜ್ಯದಲ್ಲಿ ಕಬ್ಬು ಸರಬರಾಜು ಮಾಡಿದ ರೈತರಿಗೆ ಪಾವತಿಸಲು ಬಾಕಿ ವಿವರಗಳು ದಿನಾಂಕ:15.11.2021ಕ್ಕೆ ಇದ್ದಂತೆ ಈ ಕೆಳಕಂಡಂತಿದೆ.<br>(ರೂ. ಕೋಟಿಗಳಲ್ಲಿ)
<table>
<tr><th>ಕ್ರಸ</th><th>ವರ್ಷ</th><th>ಪಾವತಿಸಬೇಕಾದ ಮೊತ್ತ</th><th>ಪಾವತಿಸಿರುವ ಮೊತ್ತ</th><th>ಬಾಕಿ</th><th>ಶೇಕಡವಾರು ಬಾಕಿ</th></tr>
<tr><td>1</td><td>2015-16</td><td>10143.14</td><td>10131.49</td><td>11.65</td><td>0.11%</td></tr>
<tr><td>2</td><td>2016-17</td><td>5343.07</td><td>6702.84</td><td>0</td><td>0</td></tr>
<tr><td>3</td><td>2017-18</td><td>9851.83</td><td>10605.12</td><td>0</td><td>0</td></tr>
<tr><td>4</td><td>2018-19</td><td>11948.39</td><td>12083.79</td><td>8.93</td><td>0.07%</td></tr>
<tr><td>5</td><td>2019-20</td><td>10428.96</td><td>10671.94</td><td>5.80</td><td>0.056%</td></tr>
<tr><td>6</td><td>2020-21</td><td>13402.22</td><td>13533.08</td><td>0</td><td>0</td></tr>
<tr><td></td><td>ಒಟ್ಟು</td><td>61117.61</td><td>63728.26</td><td>26.38</td><td></td></tr>
</table></td></tr>
</table>

**ಷರಾ:** 2016-17 ರಿಂದ 2020-21ನೇ ಸಾಲುಗಳಲ್ಲಿ ಕೆಲವು ಸಕ್ಕರೆ ಕಾರ್ಖಾನೆಗಳು ಕೇಂದ್ರ ಸರ್ಕಾರವು ನಿಗದಿಪಡಿಸಿದ ಎಫ್.ಆರ್.ಪಿ. ದರಕ್ಕಿಂತ ಹೆಚ್ಚಿಗೆ ಹಣವನ್ನು ರೈತರಿಗೆ ಪಾವತಿಸಿರುತ್ತಾರೆ.

2015-16ನೇ ಸಾಲಿನಲ್ಲಿ ಮೆ॥ ಶಿವಸಾಗರ್ ಶುಗರ್ಸ್ ಲಿ., ಉದುಪುಡಿ, ಬೆಳಗಾವಿ ಜಿಲ್ಲೆ ಕಾರ್ಖಾನೆಯು ರೂ.11.65 ಕೋಟಿಗಳನ್ನು ಬಾಕಿ ಉಳಿಸಿಕೊಂಡಿದ್ದು, ಬಾಕಿ ವಸೂಲಾತಿಗಾಗಿ ವಸೂಲಾತಿ ಪ್ರಮಾಣ ಪತ್ರವನ್ನು ದಿನಾಂಕ: 06.10.2016 ರಂದು ಜಿಲ್ಲಾಧಿಕಾರಿಗಳು, ಬೆಳಗಾವಿ ಜಿಲ್ಲೆ ಇವರಿಗೆ ಹೊರಡಿಸಲಾಗಿದೆ. ಶಿವಸಾಗರ್ ಶುಗರ್ಸ್ ಅಂಡ್ ಆಗ್ರೋ ಪ್ರಾಡಕ್ಟ್ಸ್ ಲಿ., ಉದುಪುಡಿ ಗ್ರಾಮ, ರಾಮದುರ್ಗ ತಾಲ್ಲೂಕು, ಬೆಳಗಾವಿ ಜಿಲ್ಲೆ ಈ ಕಾರ್ಖಾನೆಯು 2015-16ನೇ ಸಾಲಿನಲ್ಲಿ 226245 ಮೆ. ಟನ್ ಕಬ್ಬು ನುರಿಸಿದ್ದು, ಆ ವರ್ಷ ಕೇಂದ್ರ ಸರ್ಕಾರವು ಪ್ರತಿ ಟನ್ ಒಂದಕ್ಕೆ ನಿಗದಿಪಡಿಸಿದ ಎಫ್.ಆರ್.ಪಿ. ದರ ರೂ.2791/- ಗಳಾಗಿರುತ್ತದೆ. ಕೇಂದ್ರ ಸರ್ಕಾರವು ನಿಗದಿಪಡಿಸಿದ ಎಫ್.ಆರ್.ಪಿ. ಪ್ರಕಾರ ರೂ.6314.00 ಲಕ್ಷಗಳ ಕಬ್ಬು ಬಿಲ್ಲನ್ನು ಪಾವತಿಸಬೇಕಾಗಿದ್ದು, ಈ ಪೈಕಿ ರೂ.5049.00 ಲಕ್ಷಗಳನ್ನು ರೈತರಿಗೆ ಪಾವತಿಸಿರುತ್ತದೆ. ಬಾಕಿ ಮೊತ್ತ ರೂ.1165.00 ಲಕ್ಷಗಳಾಗಿರುತ್ತದೆ. ಈ ಮೊತ್ತಕ್ಕೆ ಕಬ್ಬು (ನಿಯಂತ್ರಣ) ಆದೇಶ, 1966ರ ಖಂಡ 3(8)ರ ಅವಕಾಶಗಳಂತೆ ಸಾಲಿಯಾನ ಶೇ.15ರ ಬಡ್ಡಿಯೊಂದಿಗೆ ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ರೀತ್ಯಾ ಭೂ ಕಂದಾಯ ಬಾಕಿ ಎಂದು ಪರಿಗಣಿಸಿ, ದಿನಾಂಕ 06.10.2016 ರಂದು ಬೆಳಗಾವಿ ಜಿಲ್ಲಾಧಿಕಾರಿಗಳಿಗೆ ವಸೂಲಾತಿ ಪ್ರಮಾಣ ಪತ್ರವನ್ನು ಹೊರಡಿಸಲಾಗಿತ್ತು. ಪುನ: ಅಂದಿನ ಮಾನ್ಯ ಪೌರಾಡಳಿತ ಮತ್ತು ಸಕ್ಕರೆ ಸಚಿವರು ದಿನಾಂಕ 09.06.2021ರ ಪತ್ರದಲ್ಲಿ ಕಾರ್ಖಾನೆಗೆ ಸೇರಿದ ಚರ ಮತ್ತು ಸ್ಥಿರಾಸ್ತಿಗಳನ್ನು ಹರಾಜು ಪ್ರಕ್ರಿಯೆಗೆ ಒಳಪಡಿಸಿ ಕಬ್ಬು ಬಿಲ್ಲು ಬಾಕಿ ಪಾವತಿಗೆ ಆದ್ಯತೆ ಮೇಲೆ ಕ್ರಮ ಕೈಗೊಳ್ಳಲು ಹಾಗೂ ಕೈಗೊಂಡ ಕ್ರಮದ ಬಗ್ಗೆ ಸರ್ಕಾರಕ್ಕೆ ವರದಿ ಸಲ್ಲಿಸುವಂತೆ ಜಿಲ್ಲಾಧಿಕಾರಿಗಳಿಗೆ ಸೂಚಿಸಿದ್ದರು. ಈ ಕಾರ್ಖಾನೆಯು 2016-17ನೇ ಹಂಗಾಮಿನಿಂದ ಕಬ್ಬು ಅರೆಯುವ ಕಾರ್ಯವನ್ನು ಸ್ಥಗಿತಗೊಳಿಸಿರುತ್ತದೆ.

ಶಿವಸಾಗರ್ ಶುಗರ್ ಅಂಡ್ ಆಗ್ರೋ ಪ್ರಾಡಕ್ಟ್ಸ್ ಲಿ., ಉದುಪುಡಿ ಈ ಕಾರ್ಖಾನೆಯ ಆಡಳಿತ ಮಂಡಳಿಯ ನಿರ್ಣಯದಂತೆ ಕಾರ್ಖಾನೆಯ ಆಡಳಿತ ನಿರ್ವಹಣೆಯನ್ನು ಮೆ॥ ಅರಿಹಂತ ಶುಗರ್ಸ್ ಇಂಡಸ್ಟ್ರೀಸ್ ಲಿ., ಇವರಿಗೆ ಹಸ್ತಾಂತರಿಸಲಾಗಿದೆ. ಈ ಎರಡೂ ಕಾರ್ಖಾನೆಗಳು ಅಫಿಡವಿಟ್ ಮೂಲಕ ನೀಡಿರುವ ಮುಚ್ಚಳಿಕೆ ಪತ್ರದಂತೆ ಬಾಕಿಯಿರುವ ರೈತರ ಕಬ್ಬಿನ ಬಿಲ್ಲನ್ನು ಹಂತ ಹಂತವಾಗಿ ಪಾವತಿಸಿ ಮಾರ್ಚ್ 2022ರ ಒಳಗಾಗಿ ಪೂರ್ಣ ಕಬ್ಬಿನ ಬಿಲ್ಲನ್ನು ಪಾವತಿಸುವುದಾಗಿ ತಿಳಿಸಿರುತ್ತಾರೆ. ಅದರಂತೆ ಕಬ್ಬಿನ ಬಾಕಿ ಬಿಲ್ಲು ಪಾವತಿಯು ಪ್ರಗತಿಯಲ್ಲಿರುತ್ತದೆ. ಈ ಎರಡೂ ಕಾರ್ಖಾನೆಗಳು ಕಂಪನಿ ಕಾಯ್ದೆಯಡಿ ನೋಂದಣಿ ಯಾಗಿರುವ ಖಾಸಗಿ ಸಕ್ಕರೆ ಕಾರ್ಖಾನೆಗಳಾಗಿರುತ್ತದೆ. ಈ ಭಾಗದ ಕಬ್ಬು ಬೆಳೆಗಾರ ರೈತರ ಮತ್ತು ಕಾರ್ಮಿಕರ ಹಿತದೃಷ್ಟಿಯಿಂದ ಮೆ॥ ಅರಿಹಂತ ಶುಗರ್ಸ್ ಲಿ., ಇವರು ಪ್ರಸ್ತುತ 2021-22ನೇ ಹಂಗಾಮಿನಿಂದ ಕಬ್ಬು ಅರೆಯುವ ಕಾರ್ಯವನ್ನು ಪ್ರಾರಂಭಿಸಲು ಪೂರ್ವ ಸಿದ್ದತಾ ಕ್ರಮಗಳನ್ನು ಕೈಗೊಂಡಿರುತ್ತಾರೆ. ಸರ್ಕಾರವು ಕಾರ್ಖಾನೆಯಿಂದ ರೈತರಿಗೆ ಪಾವತಿಯಾಗಬೇಕಾಗಿರುವ ಕಬ್ಬು ಬಿಲ್ಲು ಬಾಕಿ ಸಂಬಂಧ ಎಲ್ಲಾ ಕಾನೂನಾತ್ಮಕ ಕ್ರಮಗಳನ್ನು ಕೈಗೊಂಡಿರುತ್ತದೆ. 2016-17 ಮತ್ತು 2017-18ನೇ ಹಂಗಾಮುಗಳಲ್ಲಿ ಕಬ್ಬು ಸರಬರಾಜು ಮಾಡಿದ ರೈತರಿಗೆ ಸಕ್ಕರೆ ಕಾರ್ಖಾನೆಗಳು ಕಬ್ಬು ಬಿಲ್ಲು ಮೊತ್ತವನ್ನು ಪೂರ್ಣವಾಗಿ ತೀರುವಳಿ ಮಾಡಿರುತ್ತವೆ. ಆದ್ದರಿಂದ ಈ ಸಾಲುಗಳಲ್ಲಿ ಯಾವುದೇ ಬಾಕಿ ಇರುವುದಿಲ್ಲ.

2016-17 ಮತ್ತು 2017-18ನೇ ಹಂಗಾಮುಗಳಲ್ಲಿ ಕಬ್ಬು ಸರಬರಾಜು ಮಾಡಿದ ರೈತರಿಗೆ ಸಕ್ಕರೆ ಕಾರ್ಖಾನೆಗಳು ಕಬ್ಬು ಬಿಲ್ಲು ಮೊತ್ತವನ್ನು ಪೂರ್ಣವಾಗಿ ತೀರುವಳಿ ಮಾಡಿರುತ್ತವೆ. ಆದ್ದರಿಂದ ಈ ಸಾಲುಗಳಲ್ಲಿ ಯಾವುದೇ ಬಾಕಿ ಇರುವುದಿಲ್ಲ.

2018-19ನೇ ಹಂಗಾಮಿನಲ್ಲಿ ನಾಲ್ಕು ಸಕ್ಕರೆ ಕಾರ್ಖಾನೆಗಳಿಂದ ರೂ.8.93 ಕೋಟಿಗಳಷ್ಟು ಕಬ್ಬಿನ ಬಿಲ್ಲನ್ನು ರೈತರಿಗೆ ಪಾವತಿಸುವುದು ಬಾಕಿ ಇದ್ದು, ಕಾರ್ಖಾನೆವಾರು ವಿವರಗಳು ಈ ಕೆಳಕಂಡಂತಿರುತ್ತವೆ.

| ಕ್ರ.ಸಂ. | ಕಾರ್ಖಾನೆಯ ಹೆಸರು | ಬಾಕಿ ಮೊತ್ತ (ರೂ.ಕೋಟಿಗಳಲ್ಲಿ) |
|---|---|---|
| 1 | ಬೀದರ್ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಹಳ್ಳಿಖೇಡ್, ಹುಮಾನಾಬಾದ್ ತಾಲ್ಲೂಕು, ಬೀದರ್ ಜಿಲ್ಲೆ. | 0.89 |
| 2 | ಭವಾನಿ ಶುಗರ್ಸ್ ಲಿ., ಬರೂರ, ಬೀದರ್ ಜಿಲ್ಲೆ. | 1.80 |
| 3 | ಸಾವರೀನ್ ಇಂಡಸ್ಟ್ರೀಸ್ ಲಿ., ತೇರದಾಳ, ಜಮಖಂಡಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ | 4.99 |
| 4 | ಧ್ಯಾನಯೋಗಿ ಶಿವಕುಮಾರ ಸ್ವಾಮೀಜಿ ಶುಗರ್ಸ್ ಲಿ., ಇಂಡಿ ತಾಲ್ಲೂಕು, ವಿಜಯಪುರ ಜಿಲ್ಲೆ | 1.25 |

ಬಾಕಿ ಉಳಿಸಿಕೊಂಡಿರುವ ನಾಲ್ಕು ಸಕ್ಕರೆ ಕಾರ್ಖಾನೆಗಳ ವಿರುದ್ಧ ವಸೂಲಾತಿ ಪ್ರಮಾಣ ಪತ್ರವನ್ನು ಹೊರಡಿಸಿ ಕ್ರಮ ಕೈಗೊಳ್ಳಲು ಸಂಬಂಧಪಟ್ಟ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಸೂಚಿಸಲಾಗಿದೆ. ಆದಾಗ್ಯೂ, ಕಬ್ಬು ಬಿಲ್ಲು ಪಾವತಿಸದೇ ಇರುವುದರಿಂದ ಈ ನಾಲ್ಕು ಕಾರ್ಖಾನೆಗಳಿಗೆ ಅಂದಿನ ಮಾನ್ಯ ಪೌರಾಡಳಿತ ಮತ್ತು ಸಕ್ಕರೆ ಸಚಿವರು ದಿನಾಂಕ:09.06.2021ರಂದು ಸಂಬಂಧಪಟ್ಟ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಪತ್ರ ಬರೆದು ಚರ ಮತ್ತು ಸ್ಥಿರಾಸ್ತಿಗಳನ್ನು ಹರಾಜು ಪ್ರಕ್ರಿಯೆಗೆ ಒಳಪಡಿಸಿ ಕಬ್ಬು ಬಿಲ್ಲು ವಸೂಲಾತಿಗೆ ಸೂಕ್ತ ಕ್ರಮಕೈಗೊಳ್ಳುವಂತೆ ಸೂಚಿಸಿರುತ್ತಾರೆ. ಈ ನಾಲ್ಕು ಸಕ್ಕರೆ ಕಾರ್ಖಾನೆಗಳು ಪ್ರಸ್ತುತ ನಿಷ್ಕ್ರೀಯವಾಗಿದ್ದು ಬಾಕಿ ವಸೂಲಾತಿಗೆ ಎಲ್ಲಾ ಅಗತ್ಯ ಕಾನೂನು ಕ್ರಮಗಳನ್ನು ಕೈಗೊಳ್ಳಲಾಗಿದೆ.

2019-20ನೇ ಹಂಗಾಮಿಗೆ ರೂ. 10428.96 ಕೋಟಿಗಳನ್ನು ಕಬ್ಬು ಬೆಳೆಗಾರ ರೈತರಿಗೆ ಪಾವತಿಸಬೇಕಾಗಿದ್ದು, ಈ ಪೈಕಿ ರೂ. 10671.94 ಕೋಟಿಗಳನ್ನು ಪಾವತಿಸಿದ್ದು, ರೂ. 5.80 ಕೋಟಿಗಳು ಪಾವತಿಸಲು ಬಾಕಿ ಇರುತ್ತದೆ. ಸೋಮೇಶ್ವರ ಸಹಕಾರಿ ಸಕ್ಕರೆ ಕಾರ್ಖಾನೆ, ಬೈಲಹೊಂಗಲ ತಾಲ್ಲೂಕು, ಬೆಳಗಾವಿ ಜಿಲ್ಲೆ ಈ ಕಾರ್ಖಾನೆಯು ರೂ.5.80 ಕೋಟಿಗಳನ್ನು ಪಾವತಿಸಬೇಕಾಗಿರುತ್ತದೆ.2019-20 ನೇ ಹಂಗಾಮಿನಲ್ಲಿ ಶ್ರೀ.ಸೋಮೇಶ್ವರ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಬೈಲಹೊಂಗಲ ಈ ಕಾರ್ಖಾನೆಯು ಕಬ್ಬು ಸರಬರಾಜು ಮಾಡಿದ ರೈತರಿಗೆ ರೂ.5.80 ಕೋಟಿಗಳಷ್ಟು ಬಾಕಿ ಉಳಿಸಿಕೊಂಡಿರುತ್ತದೆ. ಈ ಕಾರ್ಖಾನೆಯು ಕಬ್ಬು ಬಿಲ್ಲು ಪಾವತಿಸದೆ ಇರುವುದರಿಂದ ಕಬ್ಬು ನಿಯಂತ್ರಣ ಆದೇಶ 1966 ರ ಕಲಂ 3(8)ರ ಅವಕಾಶ ರಿತ್ಯಾ ಕಬ್ಬು ಬಿಲ್ಲು ಬಾಕಿ ವಸೂಲಾತಿಗಾಗಿ ಜಿಲ್ಲಾಧಿಕಾರಿಗಳು, ಬೆಳಗಾವಿ ಇವರ ಮೂಲಕ ವಸೂಲಾತಿ ದೃಢೀಕರಣ ಪತ್ರವನ್ನು ದಿನಾಂಕ:06.09.2021 ರಂದು ಹೊರಡಿಸಲಾಗಿದೆ. ಸದರಿ ಆದೇಶವನ್ನು ಪ್ರಶ್ನಿಸಿ ಕಾರ್ಖಾನೆಯ ಆಡಳಿತ ಮಂಡಳಿಯು ಗೌರವ ಉಚ್ಚನ್ಯಾಯಾಲಯ, ಧಾರವಾಡ ಪೀಠ ಇಲ್ಲಿ ರಿಟ್ ಅರ್ಜಿ ಸಂಖ್ಯೆ.104662/2021 ಅನ್ನು ದಾಖಲಿಸಿದ್ದು, ಸದರಿ ರಿಟ್ ಅರ್ಜಿಯು ಇತ್ಯರ್ಥಕ್ಕೆ ಬಾಕಿ ಇರುತ್ತದೆ.

2020-2021ನೇ ಹಂಗಾಮಿನಲ್ಲಿ ಕಬ್ಬು ಸರಬರಾಜು ಮಾಡಿದ ರೈತರಿಗೆ ಕಾರ್ಯನಿರ್ವಹಿಸಿರುವ ಎಲ್ಲಾ ಸಕ್ಕರೆ ಕಾರ್ಖಾನೆಗಳು ಕಬ್ಬು ಬಿಲ್ಲು ಮೊತ್ತವನ್ನು ಎಫ್.ಆರ್.ಪಿ ದರದಂತೆ ಪೂರ್ಣವಾಗಿ ತೀರುವಳಿ ಮಾಡಿರುತ್ತದೆ. ಆದ್ದರಿಂದ ಈ ಸಾಲಿನಲ್ಲಿ ಯಾವುದೇ ಬಾಕಿ ಇರುವುದಿಲ್ಲ.

2021-22 ನೇ ಹಂಗಾಮಿನಲ್ಲಿ ಈವರೆವಿಗೂ 65 ಸಕ್ಕರೆ ಕಾರ್ಖಾನೆಗಳು ಕಬ್ಬು ಅರೆಯುವ ಕಾರ್ಯವನ್ನು ಪ್ರಾರಂಭಿಸಿದ್ದು, ಈ ಕಾರ್ಖಾನೆಗಳು ದಿನಾಂಕ: 15.11.2021 ರವರೆಗೆ ಒಟ್ಟು 112.39 ಲಕ್ಷ ಮೆ.ಟನ್ ಕಬ್ಬು ನುರಿಸಿ, 9.60 ಲಕ್ಷ ಮೆ.ಟನ್ ಸಕ್ಕರೆ ಉತ್ಪಾದಿಸಿ, ಶೇ.8.54 ರಷ್ಟು ಇಳುವರಿಯನ್ನು ಪಡೆದಿರುತ್ತವೆ. ಈ ಅವಧಿಗೆ ಕಬ್ಬು ಸರಬರಾಜು ಮಾಡಿದ ರೈತರಿಗೆ ಕಾರ್ಖಾನೆಗಳು ನ್ಯಾಯಯುತ ಮತ್ತು ಲಾಭದಾಯಕ ಬೆಲೆಯಂತೆ ಪಾವತಿಸಬೇಕಾದ ಕಬ್ಬು ಬಿಲ್ಲು ಮೊತ್ತ ರೂ. 3475.53 ಕೋಟಿಗಳಾಗಿದ್ದು, ಈ ಪೈಕಿ ಮೊತ್ತ ರೂ.1546.96 ಕೋಟಿಗಳಷ್ಟು ಪಾವತಿಸಿರುತ್ತವೆ. ಬಾಕಿ ಮೊತ್ತ ರೂ. 1928.57 ಕೋಟಿಗಳಷ್ಟು ಬಾಕಿ ಇರುತ್ತದೆ. ಪ್ರಸ್ತುತ 2021-22 ನೇ ಹಂಗಾಮನ್ನು ನವೆಂಬರ್ ಮೊದಲ/ಎರಡನೆ ವಾರದಲ್ಲಿ ಪ್ರಾರಂಭಿಸಿರುತ್ತವೆ.ಹಂಗಾಮು ಚಾಲ್ತಿಯಲ್ಲಿರುವುದರಿಂದ ಕಾರ್ಖಾನೆಗಳು ರೈತರ ಕಬ್ಬು ಬಿಲ್ಲನ್ನು ನಿಯಮಾನುಸಾರ ಪ್ರತಿ 15 ದಿನಗಳಿಗೊಮ್ಮೆ ಪಾವತಿಸಲು ಕ್ರಮ ಕೈಗೊಳ್ಳುತ್ತಿವೆ. ಒಂದು ವೇಳೆ ಪಾವತಿ ಮಾಡದೆ ಇದ್ದಲ್ಲಿ ಕಬ್ಬು (ನಿಯಂತ್ರಣ) ಆದೇಶ 1966 ರ ಪ್ರಕಾರ ಶಾಸನ ಬದ್ಧ ನೋಟೀಸ್‌ಗಳನ್ನು ಜಾರಿಗೊಳಿಸಿ ಪಾವತಿಗೆ ಕ್ರಮ ಜರುಗಿಸಲಾಗುವುದು.

| | | |
|---|---|---|
| (ಊ) | ಮಂಡ್ಯದ ಮೈಷುಗರ್ ಸಕ್ಕರೆ ಕಾರ್ಖಾನೆಯ 'ಪುನಶ್ಚೇತನ' ಕಾರ್ಯದಲ್ಲಿ ಸರ್ಕಾರ ಯಾವ ಪ್ರಗತಿ ಸಾಧಿಸಿದೆ? (ವಿವರ ನೀಡುವುದು) | ದಿ ಮೈಸೂರು ಷುಗರ್ ಕಂಪನಿ ಲಿ, ಮಂಡ್ಯ ಈ ಕಾರ್ಖಾನೆಯನ್ನು 2 ವರ್ಷಗಳ ಅವಧಿಗೆ ಪ್ರಾಯೋಗಿಕವಾಗಿ ಸರ್ಕಾರಿ ಸ್ವಾಮ್ಯದಲ್ಲಿ ಪುನಶ್ಚೇತನಗೊಳಿಸಲು ದಿನಾಂಕ:18.10.2021 ರಂದು ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ಜರುಗಿದ ಸಭೆಯಲ್ಲಿ ತೀರ್ಮಾನಿಸಲಾಗಿದೆ.<br><br>ದಿನಾಂಕ:18.10.2021 ರಂದು ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ಜರುಗಿದ ಸಭೆಯ ತೀರ್ಮಾನದಂತೆ ಈ ಕಾರ್ಖಾನೆಯನ್ನು ಪ್ರಾರಂಭ ಮಾಡುವ ಸಂಬಂಧ ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗಿದೆ.<br><br>1) ಮೈಸೂರು ಸಕ್ಕರೆ ಕಾರ್ಖಾನೆಯನ್ನು ಪುನಶ್ಚೇತನಗೊಳಿಸುವ ಸಂಬಂಧ ಆಡಳಿತ, ಹಣಕಾಸು ಮತ್ತು ತಾಂತ್ರಿಕ ವರದಿಯನ್ನು ಪಡೆಯಲು ಹಾಗೂ operation and maintain (ಓ ಆಂಡ್ ಎಂ) ಆಧಾರದ ಮೇಲೆ ನೀಡಲು ಟೆಂಡರ್ ಡಾಕ್ಯುಮೆಂಟ್‌ನ್ನು ಸಿದ್ಧಪಡಿಸುವುದಕ್ಕಾಗಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ನಿಯಮಗಳು 2000 ರಡಿಯಲ್ಲಿ 14 ದಿನಗಳ ಅಲ್ಪಾವಧಿ ಟೆಂಡರ್ ಕರೆದು ಕನ್ಸಲ್‌ಟೆನ್ಸಿ ಸೇವೆಯನ್ನು ಪಡೆದು ಅಗತ್ಯ ಕ್ರಮ ವಹಿಸುವುದಕ್ಕಾಗಿ ಸರ್ಕಾರದ ಪತ್ರ ಸಂಖ್ಯೆ:ಸಿಐ 326 ಸಿಓಎಫ್ 2021, ದಿನಾಂಕ:02.12.2021 ರಲ್ಲಿ ಅನುಮತಿ ನೀಡಲಾಗಿದ್ದು, ಟೆಂಡರ್ ಕರೆಯುವ ಕಾರ್ಯ ಪ್ರಗತಿಯಲ್ಲಿದೆ.<br><br>2) ದಿ ಮೈಸೂರು ಷುಗರ್ ಕಂಪನಿ ಲಿ, ಮಂಡ್ಯ ಈ ಕಾರ್ಖಾನೆಯನ್ನು ಸರ್ಕಾರಿ ಸ್ವಾಮ್ಯದಲ್ಲಿ ನಡೆಸಲು ಅನುಕೂಲವಾಗುವಂತೆ ವರದಿಯನ್ನು ಪಡೆಯುವ ಸಲುವಾಗಿ ಸರ್ಕಾರದ ಆದೇಶ ಸಂಖ್ಯೆ:ಸಿಐ 324 ಸಿಓಎಫ್ 2021, ದಿನಾಂಕ:03.12.2021 ರಲ್ಲಿ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ತಾಂತ್ರಿಕ ಸಲಹಾ ಸಮಿತಿಯನ್ನು ರಚಿಸಿ ಆದೇಶಿಸಲಾಗಿದೆ. |

**ಸಂಖ್ಯೆ: ಸಿಐ 365 ಸಿಓಎಫ್ 2021**

(ಶಂಕರ ಬ.ಪಾಟೀಲ ಮುನೇನಕೊಪ್ಪ)
ಕೈಮಗ್ಗ ಮತ್ತು ಜವಳಿ, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ಸಚಿವರು